ಕೆ. ಜಗನ್ನಾಥ ಶಾಸ್ತ್ರಿ

# ಪೊಂಬುರ್ಚನಾಡಿನ ಅರಸು ಪರಂಪರೆ

ಹೊಂಬುಜ ಒಂದು ಚಿಕ್ಕ ಗ್ರಾಮ. ಇದು ಶಿವಮೊಗ್ಗ ಜಿಲ್ಲೆಯ ಹೊಸನಗರ ತಾಲ್ಲೂಕಿನಲ್ಲಿದೆ. ಇದು ಜೈನ ಧರ್ಮೀಯ ದಿಗಂಬರ ಪಂಥದವರ ಯಾತ್ರಾಸ್ಥಳ. ಒಂದು ಅತಿಶಯ ಕ್ಷೇತ್ರ. ಇದರ ಕೀರ್ತಿ ಭಾರತದ ಉದ್ದಗಲಕ್ಕೂ ಹಬ್ಬಿದೆ. ಹೊಂಬುಜದಲ್ಲಿ ಒಟ್ಟು ೨೮ ಶಿಲಾಶಾಸನಗಳಿವೆ. ಕ್ರಿ. ಶ. ೮೦೦ ರಿಂದ ಕ್ರಿ. ಶ. ೧೫೩೦ ರ ವರೆಗೆ ಇವುಗಳ ಹರವು ಇದೆ.

೧. ಶಾಸನಗಳ ವಿವರ (**Inscriptions of Shimoga Dirtrict** ನಲ್ಲಿ ಹೇಳಿರುವಂತೆ) :

| | ಪ್ರದೇಶ | ಒಟ್ಟು ಶಾಸನಗಳು | ಅವಧಿ | 'ಇನ್ಸ್ಕ್ರಿಪ್ಷನ್ಸ್ ಆಫ್ ಶಿವಮೊಗ್ಗ ಡಿಸ್ಟ್ರಿಕ್ಟ್'ನಲ್ಲಿ ಹೇಳಿರುವ ಶಾಸನಗಳ ಸಂಖ್ಯೆ |
|---|---|---|---|---|
| ೧ | ಪಂಚ ಬಸದಿ | ೧೧ | ಕ್ರಿ. ಶ. ೯೫೦ ರಿಂದ ಕ್ರಿ.ಶ. ೧೨೯೭ | ೩೫ ರಿಂದ ೪೭ ರ ವರೆಗೆ |
| ೨ | ಪದ್ಮಾವತಿ ದೇವಾಲಯ | ೧೦ | ಕ್ರಿ.ಶ. ೧೦೭೦ ರಿಂದ ಕ್ರಿ.ಶ. ೧೫೩೦ | ೪೭, ೪೮ ರಿಂದ ೫೭ ರ ವರೆಗೆ |
| | ಈಗ ಈ ದೇವಾಲಯದ ಬಳಿ ಹತ್ತು ಶಾಸನಗಳೂ ಇಲ್ಲ. ದೇವಾಲಯದ ಪುನರ್ನಿರ್ಮಾಣ ಸಮಯದಲ್ಲಿ ಸ್ಥಳಾಂತರಿಸಲಾಗಿದೆ. | | | |
| ೩ | ಸೂಳೆ ಬಸದಿ | ೨ | ಕ್ರಿ.ಶ. ೧೦೭೨ ರಿಂದ ಕ್ರಿ.ಶ. ೧೦೭೬ | ೫೬, ೫೮ |
| | ೫೬ ನೆಯ ಶಾಸನ, ಒಂದು ಮಾನಸ್ಥಂಭದ ಮೇಲಿದೆ. ಮಾನಸ್ಥಂಭವನ್ನು ಈಗ ಪಾರ್ಶ್ವನಾಥ ದೇವಾಲಯದ ಮುಂದೆ ಸಭಾಂಗಣದ ಮುಂಭಾಗದಲ್ಲಿ ತಂದು ಸ್ಥಾಪಿಸಲಾಗಿದೆ. | | | |
| ೪ | ಚಂದ್ರಪ್ರಭ ಬಸದಿಯ ಗೋಡೆಯ ಮೇಲೆ | ೧ | ಕ್ರಿ. ಶ. ೧೦೭೭ | ೫೯ |
| ೫ | ಗುಡ್ಡದ ಬಸದಿ | ೧ | — | ೬೦ |
| | ಈಗ ಗುಡ್ಡದ ಬಸದಿ ಇಲ್ಲ. ಇದನ್ನು ನೆಲಸಮ ಮಾಡಲಾಗಿದೆ. ಹಾಗಾಗಿ ಈ ಶಾಸನವನ್ನು ನೋಡುವುದೂ ಕಷ್ಟ. | | | |
| ೬ | ಕಮಠೇಶ್ವರ ದೇವಾಲಯ | ೧ | ಕ್ರಿ. ಶ. ೮೦೦ ರಿಂದ ಕ್ರಿ. ಶ. ೧೨೮೮ | ೬೧ |
| | ಈ ದೇವಾಲಯದ ಪ್ರವೇಶ ದ್ವಾರದ ಮೇಲೆ ದ್ವಾರಬಂಧದ ಮೇಲೆ ಒಂದು ಶಾಸನವಿದೆ. | | | |

'ಹುಂಚ' ಹೆಸರಿನ ಹಿನ್ನೆಲೆ: ಪ್ರಾಚೀನ ಕಾಲದಿಂದಲೂ ಈ ಪ್ರಾಂತವನ್ನು ಬೇಡರ ನಾಯಕರು ಆಳುತ್ತಿದ್ದರು. ಈಗಿನ ಹುಂಚ- ಎಂಬ ಗ್ರಾಮ ಇರುವಲ್ಲಿ ಹಿಂದೆ 'ಕನಕಪುರ' ಎಂಬ ಊರು ಇತ್ತು. ಈಗಿನ ಹುಂಚ ಮತ್ತು ಭಿಲ್ಲೇಶ್ವರ- ಈ ಎರಡು ಊರುಗಳೂ ಸೇರಿ ಆಗಿನ ಕನಕಪುರವಾಗಿತ್ತು. ಈ ಸುತ್ತಲ ಹಿರಿಯ ಜನರು ತಿಳಿದಿದ್ದ 'ಶ್ರೀ ಭಿಲ್ಲೇಶ್ವರ ಮಹಾತ್ಮೆ' ಎಂಬ ಜನಪದಕಾವ್ಯದ ಪದ್ಯಗಳನ್ನು ನಾನು ಸಂಗ್ರಹಿಸುತ್ತಿದ್ದೇನೆ. ಇದು ಸಾಂಗತ್ಯದಲ್ಲಿ ರಚಿತವಾಗಿದೆ. ಇದರ ಒಂದು ಪದ್ಯ ಹೀಗಿದೆ :

ಕನಕಪುರದ ಅರಸ ಕನಕನಾಯಕ ಧೀರ ।
ಕನಕವನ್ನೇ ದಾನ ನೀಡೆ ।
ಮನಮೆಚ್ಚಿ ಪೊಂಬಿಚ್ಚಪುರವೆಂದು ಕರೆದರು ।
ವಿನಯದಿ ಪೊಗಳಿ ಪಾಡುತಲಿ ॥

ಈ ಪದ್ಯದಿಂದ ಈ ಪ್ರದೇಶವನ್ನು ಕನಕನಾಯಕ ಎಂಬ ಬೇಡರ ತಲೆಯಾಳು ಆಳುತ್ತಿದ್ದನೆಂದೂ ರಾಜಧಾನಿಯ ಹೆಸರು ಕನಕಪುರವೆಂದೂ ಅವನು ಪೊನ್ನನ್ನೇ ಬಿಚ್ಚ(ಭಿಕ್ಷ)ವಾಗಿ ಕೊಡುತ್ತಿದ್ದುದರಿಂದ ಅರ್ಥಿಗಳು ಇದನ್ನು 'ಪೊಂಬಿಚ್ಚಪುರ' ಎಂದು ಕರೆದರೆಂದೂ ದೃಢಪಡುತ್ತದೆ. 'ಶ್ರೀಪದ್ಮಾವತೀಮಹಾತ್ಮೆ ಅಥವಾ ಜಿನದತ್ತರಾಯಪುರಾಣ' ಎಂಬ ಸಾಂಗತ್ಯ ಗ್ರಂಥವೊಂದಿದೆ. ಇದನ್ನು ಪದ್ಮನಾಭಕವಿ ಬರೆದಿದ್ದಾನೆ. ಇದು ಸಾಂಗತ್ಯದಲ್ಲಿದೆ. ಈ ಪ್ರದೇಶವನ್ನು ಬೇಡರ ನಾಯಕ ಆಳುತ್ತಿದ್ದನೆಂಬುದಕ್ಕೆ ಒಂದು ಪದ್ಯ ಹೀಗೆ ಹೇಳುತ್ತದೆ.

ಜೀನದತ್ತರಾಯ ಲಕ್ಕಿಮರದ ಬಳಿ ಬಂದು ಇದ್ದಾನೆ. ಹೊಸಬನಾದ ಇವನನ್ನು ಕಂಡ ವನಚರರು ಹತ್ತಿರ ಬರುತ್ತಾರೆ. ಆಗ ಜಿನದತ್ತ ಕೇಳುತ್ತಾನೆ :

ವನವ ರಕ್ಷಿಪರಾರು ಗೃಹವೆಲ್ಲಿ ನಿಮಗೆಂದು ।
ಜಿನದತ್ತರಾಯ ಕೇಳಿದನು ॥

ಇದಕ್ಕೆ ವನಚರರ ಉತ್ತರ :

ವನವೀ ಬ್ಯಾಡನಾಯಕನದು ನಮಗೀ ।
ವನದೊಳಗಾವಾಸ ಸ್ವಾಮಿ ॥

ಇದೇ ಕಾವ್ಯದ ಪ್ರಸ್ತಾವನೆಯಲ್ಲಿ ಕವಿ ಒಂದು ಶ್ಲೋಕವನ್ನು ಉದ್ಧರಿಸುತ್ತಾನೆ. (ಈ ಪದ್ಯ ಪದ್ಮಾವತಿ ಅಮ್ಮನವರ ಗರ್ಭಗುಡಿಯಲ್ಲಿದ್ದ ಒಂದು ಶಾಸನದಲ್ಲಿದೆ. ದೇವಾಲಯವನ್ನು ಪುನರ್ನಿರ್ಮಾಣ ಮಾಡಿದಾಗ ಈ ಶಾಸನವನ್ನು ಸ್ಥಳಾಂತರಿಸಿದ್ದಾರೆ). ಆ ಶ್ಲೋಕ ಹೀಗಿದೆ :

ಕಲ್ಯಬ್ದೇ ಶತಪಂಚಕೇ ಪ್ರಭವ ಸಂವತ್ಸರೇ
ಸತ್ತಮೇ ಸ್ಯಾತ್ತಪಸ್ಯೇ ।
ಸಪ್ತಮ್ಯಾಂ ಕೃಷ್ಣಪಕ್ಷೇ ಪ್ರವರ ಗುರುದಿನೇ
ಕುಂಭಲಗ್ನೇ ಪ್ರಸೀದೇ ।
ಮೂಲಾಭೇ ಸಿದ್ಧಿಯೋಗೇ ಪ್ರಕಟಿತ ವಿಭವೇ
ಸುಪ್ರಶಸ್ತಾಂ ಚಕಾರ ।
ರಾಜಾ ಜೈನೇಂದ್ರದತ್ತಃ ಕನಕಮಯಪುರೇ
ಯಕ್ಷದೇವೀಂ ಪ್ರತಿಷ್ಠಾ ॥

ಕಲಿವರ್ಷದ ಐದುನೂರನೆಯ ಪ್ರಭವ ಸಂವತ್ಸರದಲ್ಲಿ ಫಾಲ್ಗುಣ ಕೃಷ್ಣ ಸಪ್ತಮಿ, ಗುರುವಾರ, ಕುಂಭಲಗ್ನವೂ ಮೂಲಾನಕ್ಷತ್ರವೂ ಸಿದ್ಧಿಯೋಗವೂ ಇರುವ ಶುಭ ಮುಹೂರ್ತದಲ್ಲಿ ಜೈನೇಂದ್ರದತ್ತ(ಜಿನದತ್ತ)ನು ಕನಕಮಯ ಪುರದಲ್ಲಿ ಯಕ್ಷದೇವಿ(ಪದ್ಮಾವತಿ)ಯನ್ನು ಪ್ರತಿಷ್ಠಾಪಿಸಿದನು.

ಈ ಆಧಾರಗಳಿಂದ ಈಗಿನ ಹುಂಚವು ಆಗ ಕನಕಪುರ ಎಂದು ಹೆಸರು ಪಡೆದಿತ್ತು ಎಂಬುದು ಸ್ಪಷ್ಟಪಡುತ್ತದೆ. ಅಲ್ಲದೆ ಜಿನದತ್ತರಾಯ ಈ ಪ್ರದೇಶಕ್ಕೆ ಬರುವ ಮೊದಲೇ ಕನಕಪುರಕ್ಕೆ ಪೊಂಬಿಚ್ಚಪುರ ಎಂಬ ಹೆಸರೂ ಇತ್ತೆಂದೂ ದೃಢವಾಗುತ್ತದೆ ಇದು ರಾಜಧಾನಿಯಾದ್ದರಿಂದ 'ಪೊಟ್ಟಿ ಪೊಂಬಿಚ್ಚಪುರ' ಎಂದು ಕರೆದಿರಬಹುದು. ಕಾಲಾಂತರದಲ್ಲಿ ಇದು ಪೊಂಬಿಚ್ಚ— ಪೊಂಬುಚ್ಚ— ಹೊಂಬಿರ್ಚ— ಹೊಂಬುಚ— ಹುಂಚ ಆಗಿದೆ.

ಅರಸೊತ್ತಿಗೆಯ ಪರಂಪರೆ : ಶಾಸನಗಳಲ್ಲಿ ವಿವರಿಸಿರುವಂತೆ ಪೊಂಬುರ್ಚ ರಾಜ್ಯದ ಅರಸು ಪರಂಪರೆ ಹೀಗಿದೆ:

ಉತ್ತರಭಾರತದಲ್ಲಿ ಮಥುರೆ ಒಂದು ರಾಜ್ಯ. ಅದನ್ನು ಉಗ್ರವಂಶದವರು ಆಳುತ್ತಿದ್ದರು. ರಾಹ ಎಂಬುವನು ಈ ವಂಶದಲ್ಲಿ ಪ್ರಸಿದ್ಧನಾಗಿದ್ದವನು. ಅವನು ಕುರುಕ್ಷೇತ್ರದಲ್ಲಿ ನಡೆದ ಭಾರತ ಯುದ್ಧದಲ್ಲಿ ಹೋರಾಡಿ ಗೆಲ್ಲಲು, ನಾರಾಯಣನು ಮೆಚ್ಚಿ ಒಂದು ಶಂಖವನ್ನೂ ವಾನರಧ್ವಜವನ್ನು ಕೊಟ್ಟನು. ಅನಂತರ ಹಲವರು ರಾಜ್ಯವಾಳಿದರು. ಸಹಕಾರ ಎಂಬ ಅರಸ ಆಳುತ್ತಿದ್ದ ಕಾಲ. ಆತ ನರಮಾಂಸ ತಿನ್ನಲು ಪ್ರಾರಂಭಿಸಿದ. ಅವನ ಹೆಂಡತಿ ಶ್ರಿಯಾದೇವಿ. ಇವಳಲ್ಲಿ ಹುಟ್ಟಿದವನು ಜಿನದತ್ತ. ಜಿನದತ್ತ ತಂದೆಯಾದ ಸಹಕಾರ ದೇವನ ನಡತೆಗೆ ಹೇಸಿ, ರಾಜ್ಯವನ್ನು ಬಿಟ್ಟು, ದಕ್ಷಿಣಾಭಿಮುಖವಾಗಿ ಹೊರಟ. ಮಾರ್ಗಮಧ್ಯದಲ್ಲಿ ತನ್ನನ್ನು ತಡೆದ ಸಿಂಹರಥ ಎಂಬ ಅಸುರನನ್ನು ಕೊಂದ. ಇದನ್ನು ಮೆಚ್ಚಿದ ಜಕ್ಕಿಯಬ್ಬೆ (ಪದ್ಮಾವತಿದೇವಿ) ಸಿಂಹಲಾಂಛನವನ್ನು ಕೊಟ್ಟಳು. ಮುಂದುವರಿದು ಬಂದ ಜಿನದತ್ತ ಅಂಧಕಾಸುರ ಎಂಬ ಅಸುರನನ್ನು ಕೊಂದನು. ಆ ಸ್ಥಳದಲ್ಲಿದ್ದ ಊರಿಗೆ ಅಂಧಾಸುರ ಎಂದೇ ಹೆಸರು ಇಟ್ಟನು. (ಶಿವಮೊಗ್ಗ ಜಿಲ್ಲೆಯ ಸಾಗರ ತಾಲ್ಲೂಕಿನ ಆನಂದಪುರದ ಬಳಿ ಈ ಊರು ಇದೇ ಹೆಸರಿನಿಂದ ಈಗಲೂ ಇದೆ). ಅನಂತರ ಕನಕಪುರ(ಈಗಿನ ಹುಂಚ)ಕ್ಕೆ ಬಂದು ಕನಕಾಸುರನನ್ನು ಕೊಂದನು. ಕುಂದದ ಕೋಟೆಯಲ್ಲಿದ್ದ (ತೀರ್ಥಹಳ್ಳಿ ತಾಲ್ಲೂಕಿನ ಕುಂದಾದ್ರಿ) ಕರ ಮತ್ತು ಕರದೂಷಣ ಎಂಬ ರಾಕ್ಷಸರನ್ನು ಯುದ್ಧಮಾಡಿ ಓಡಿಸಿದ. ಇದರಿಂದ ಪ್ರಸನ್ನಳಾದ ಪದ್ಮಾವತಿದೇವಿಯು ಕನಕಪುರ ಎನಿಸಿದ ಪೊಂಬುರ್ಚದ ಲೊಕ್ಕಿಯ ಮರದಲ್ಲಿ ನೆಲೆಸಿ, ಲೊಕ್ಕಿಯಬ್ಬೆ ಎಂಬ ಎರಡನೆಯ ಹೆಸರನ್ನು ಪಡೆದಳು. ಅನಂತರ ಜಿನದತ್ತನಿಗೆ ಈ ಊರನ್ನೇ ರಾಜ್ಯಸ್ಥಾನ (ರಾಜಧಾನಿ) ಮಾಡಿಕೊಳ್ಳುವಂತೆ ಹೇಳಿದಳು. ಇಲ್ಲಿ ಜಿನದತ್ತನೂ ಅನಂತರ ಇನ್ನೂ ಕೆಲವರೂ ರಾಜ್ಯವಾಳಿದರು.

ಶ್ರೀಕೇಶಿ ಮತ್ತು ಜಯಕೇಶಿ ಎಂಬುವರು ಈ ವಂಶದ ಪ್ರಸಿದ್ಧರಾದ ರಾಜರು. ಶ್ರೀಕೇಶಿಗೆ ವಿವಾಹವಾಗಿತ್ತು. ಅವನ ಹೆಂಡತಿಯ ಹೆಸರು ಮಹಾದೇವಿ. ಇವರ ಮಗ ರಣಕೇಶಿ. ಇವನ ನಂತರ ಹಲವರು ರಾಜ್ಯವಾಳಿದರು.

ಅನಂತರ ಆಳಿದವರಲ್ಲಿ ಹಿರಣ್ಯಗರ್ಭ ಪ್ರಸಿದ್ಧನಾದವನು. ಇವನು ಶಾಂತಳಿಗೆ ನಾಡನ್ನು ಏಕಾಯತ್ತ ಮಾಡಿದನು. ಇವನು ಮಹಾದಾನಿ. ಇವನನ್ನು ಕಂದುಕಾಚಾರ್ಯ, ದಾನವಿನೋದಿ, ವಿಕ್ರಮಶಾಂತರ–ಎಂದು ಕರೆಯುತ್ತಿದ್ದರು. ಇವನ ಹೆಂಡತಿ ಲಕ್ಷ್ಮೀದೇವಿ. ಇವಳು ಬನವಸಿಯ ಅರಸ ಕಾಮದೇವನ ಮಗಳು. ಹಿರಣ್ಯಗರ್ಭ ಮತ್ತು ಲಕ್ಷ್ಮೀದೇವಿಗೆ ಒಬ್ಬ ಮಗನಾದ. ಅವನ ಹೆಸರು ಚಾಗಿ ಶಾಂತರ. ಇವನು ಚಾಗಿಸಮುದ್ರ ಎಂಬ ಕೆರೆಯನ್ನು ಕಟ್ಟಿಸಿದನು. ಚಾಗಿಶಾಂತರನಿಗೆ ಆಳುಪರ ಅರಸ ರಣಂಜಯನ ಮಗಳು ಎಂಜಲದೇವಿಯನ್ನು ಕೊಟ್ಟು ವಿವಾಹವಾಗಿತ್ತು. ಇವರ ಮಗ ವೀರಶಾಂತರ. ವೀರಶಾಂತರನಿಗೆ ಅದೆಯೂರ ಶಾಂತಿವರ್ಮನ ಮಗಳು ಜಾಕಲದೇವಿ ಪತ್ನಿಯಾದಳು. ಇವರಿಗೆ ಕನ್ನರಶಾಂತರ ಮತ್ತು ಕಾಮದೇವ ಎಂಬ ಇಬ್ಬರು ಗಂಡುಮಕ್ಕಳಾದರು. (ಕನ್ನರಶಾಂತರನಿಗೆ ವಿವಾಹವಾದಂತೆ ಇಲ್ಲ). ಕಾಮಶಾಂತರನು ಬೀರಬಯಲ್‌ನಾಥನ ಮಗಳು ಚಂದಲದೇವಿಯನ್ನು ಮದುವೆಯಾದನು. ಇವರ ಮಗ ತ್ಯಾಗಿ ಶಾಂತರ. ಕಾಮದೇವನ ನಂತರ ತ್ಯಾಗಿಶಾಂತರ ಪೊಂಬುರ್ಚದ ರಾಜನಾದ. ತ್ಯಾಗಿಶಾಂತರ ಮತ್ತು ನಾಗಲದೇವಿಯ ಮಗ ನನ್ನಿಶಾಂತರ. ಇವನು ಪಲಸಿಗೆ ನಾಡಿನ ಅರಿಕೇಸರಿಯ ಮಗಳು ಸಿರಿಯಾದೇವಿಯನ್ನು ವಿವಾಹವಾದ. ಇವರ ಮಗ ರಾಯಶಾಂತರ. ಇವನು ಅಕ್ಕಾದೇವಿಯನ್ನು ವಿವಾಹವಾದ. ಇವರಿಗೆ ಚಿಕ್ಕವೀರ ಶಾಂತರ ಎಂಬ ಮಗ ಹುಟ್ಟಿದ. ಇವನು ರಾಜನಾಗಿದ್ದಾಗ ಬಿಜ್ಜಲದೇವಿಯನ್ನು ವಿವಾಹವಾದ. ಚಿಕ್ಕವೀರ ಶಾಂತರ-ಬಿಜ್ಜಲದೇವಿಯರ ಮಗ ಅಣ್ಣಮದೇವ. ಅಣ್ಣಮದೇವನಿಗೂ ವಿವಾಹವಾಯಿತು. ಅವನ ಹೆಂಡತಿ ಹೋಚಲದೇವಿ. ಇವರಿಗೆ ಇಬ್ಬರು ಮಕ್ಕಳು. ಹಿರಿಯವಳು ಹೆಣ್ಣು. ಅವಳ ಹೆಸರು ಬೀರಬ್ಬರಸಿ. ಕಿರಿಯವನು ಗಂಡು. ಅವನ ಹೆಸರು ತೈಲಪದೇವ. ಬೀರಬ್ಬರಸಿಯನ್ನು ಆಳುಪರ ಬಂಕಿಯಾಳ್ವನಿಗೆ ಕೊಟ್ಟು ಮದುವೆ ಮಾಡಿದರು.

ಬಂಕಿಯಾಳ್ವನ ತಂಗಿಯಾದ ಮಾಂಕಬ್ಬರಸಿಯನ್ನು ತೈಲಪದೇವ ವಿವಾಹವಾದ. ತೈಲಪನು ಅನಂತರ ಗಂಗರ ರಾಜನಾದ ಪಾಲಯದೇವನ ಮಗಳು ಕೆಳೆಯಬ್ಬರಸಿಯನ್ನೂ ವಿವಾಹವಾದ. ಈ ಕೆಳೆಯಬ್ಬರಸಿಯೇ ಪಟ್ಟದ ರಾಣಿಯಾದಳು. ಇವರಿಗೆ ಮೂವರು ಗಂಡುಮಕ್ಕಳು,

ಬೀರದೇವ, ಸಿಂಗಿದೇವ, ಬ್ರಹ್ಮದೇವ. ಹಿರಿಯನಾದ ಬೀರದೇವನಿಗೆ ನಾಲ್ವರು ಹೆಂಡತಿಯರು. ಮೊದಲನೆಯವಳು ಬೀರಲಮಹಾದೇವಿ. ಇವಳು ಗಂಗ ವಂಶದವಳು. ಎರಡನೆಯವಳು ಬಿಜ್ಜಲದೇವಿ. ಇವಳು ನೊಳಂಬರ ರಾಜ ನರಸಿಂಗದೇವನ ಮಗಳು. ಮೂರನೆಯವಳು ಆಚಲದೇವಿ. ಇವಳಿಗೆ ಮಹಾದೇವಿ ಎಂಬ ಮತ್ತೊಂದು ಹೆಸರೂ ಇತ್ತು. ಇವಳು ಆಳುಪರ ವಂಶದವಳು. ನಾಲ್ಕನೆಯವಳು ಚಾಗಲದೇವಿ.

ಬೀರದೇವನ ಹೆಂಡತಿ ಬೀರಲದೇವಿ. ಗಂಗರ ರಾಜನಾದ ರಕ್ಕಸಗಂಗನ ಸಾಕುಮಗಳು. (ರಕ್ಕಸಗಂಗನಿಗೆ ಒಬ್ಬ ತಮ್ಮ ಇದ್ದ. ಅವನ ಹೆಸರು ಅರುಮುಳಿದೇವ. ಇವನ ಹೆಂಡತಿ ಗಾವಬ್ಬರಸಿ. ಇವರಿಗೆ ಮೂವರು ಮಕ್ಕಳು, ಚಟ್ಟಲದೇವಿ, ಕಂಚಲದೇವಿ ಮತ್ತು ರಾಜವಿದ್ಯಾಧರ. ಈ ಮಕ್ಕಳು ಚಿಕ್ಕವರಾಗಿದ್ದಾಗ ತಂದೆ-ತಾಯಿ ಸತ್ತುಹೋಗಿರಬೇಕು. ಅನಂತರ ರಕ್ಕಸಗಂಗನೇ ಈ ಮೂವರನ್ನೂ ಸಾಕಿರಬೇಕು. ಎರಡನೆಯವಳಾದ ಕಂಚಲದೇವಿಗೆ ವೀರಲದೇವಿ ಎಂಬ ಹೆಸರೂ ಇತ್ತೆಂದು ತೋರುತ್ತದೆ. ಇವಳೇ ಬೀರದೇವನ ಹಿರಿಯ ರಾಣಿ). ಬೀರದೇವ–ಬೀರಲದೇವಿಯರಿಗೆ ನಾಲ್ಕು ಜನ ಗಂಡು ಮಕ್ಕಳು, ತೈಲಪ, ಗೊಗ್ಗಿಗ, ಒಡ್ಡುಗ ಮತ್ತು ಬಮ್ಮ. ತೈಲನಿಗೆ ಭುಜಬಲಶಾಂತರ ಎಂಬ ಹೆಸರೂ ಗೊಗ್ಗಿಗನಿಗೆ ಗೋವಿಂದರ, ನನ್ನಿಶಾಂತರ ಎಂಬ ಹೆಸರುಗಳೂ ಒಡ್ಡುಗನಿಗೆ ವಿಕ್ರಮಶಾಂತರ, ನನ್ನಿಶಾಂತರ, ಒಡ್ಡಮರಸ ಎಂಬ ಹೆಸರುಗಳೂ ಬಮ್ಮನಿಗೆ ಬ್ರಹ್ಮದೇವ ಎಂಬ ಹೆಸರೂ ಇದ್ದವು.

ಇವರಲ್ಲಿ ತೈಲಪನಿಗೆ ಚಟ್ಟಲದೇವಿಯೊಂದಿಗೆ ವಿವಾಹವಾಗಿತ್ತು. ಇವರಿಗೆ ಪಂಪಾದೇವಿ ಎಂಬ ಮಗಳೂ ಶ್ರೀವಲ್ಲಭ ಎಂಬ ಮಗನೂ ಹುಟ್ಟಿದರು. ಪಂಪಾದೇವಿಗೆ ವಿವಾಹವಾಗಿತ್ತು. (ಪತಿಯ ಹೆಸರು ತಿಳಿಯದು). ಇವಳ ಮಗಳು ಬಾಚಲದೇವಿ.

(ಗೊಗ್ಗಿಗ ಮತ್ತು ಬಮ್ಮನಿಗೆ ವಿವಾಹವಾದಂತಿಲ್ಲ) ಒಡ್ಡುಗನಿಗೆ ವಿವಾಹವಾಗಿದೆ. ಇವನ ಹೆಂಡತಿ ಚಂದಲದೇವಿ. ಇವಳಿಗೆ ಚಾಗಲದೇವಿ ಎಂಬ ಹೆಸರೂ ಇತ್ತು. ಇವಳು ಪಾಂಡ್ಯ ಕುಲದವಳು. ಒಡ್ಡುಗ ಮತ್ತು ಚಂದಲದೇವಿಗೆ ಮೂವರು ಗಂಡುಮಕ್ಕಳು, ತೈಲ, ಗೋವಿಂದ ಮತ್ತು ಬೊಪ್ಪುಗ. ತೈಲನಿಗೆ ತೈಲುಗ, ತೈಲಹ, ತ್ರಿಭುವನಮಲ್ಲ ಹಾಗೂ ಗೋವಿಂದನಿಗೆ ರಾಯಶಾಂತರ ಎಂಬ ಹೆಸರೂ ಇದ್ದುವು. (ಗೋವಿಂದ ಮತ್ತು ಬೊಪ್ಪುಗನಿಗೆ ವಿವಾಹವಾದಂತೆ ಇಲ್ಲ). ತೈಲನಿಗೆ ವಿವಾಹವಾಗಿದೆ. ಅವನ ಪತ್ನಿಯ ಹೆಸರು ಅಕ್ಕಾದೇವಿ. ಇವರಿಗೆ ಮೂವರು ಮಕ್ಕಳು, ಕಾಮದೇವ, ಸಿಂಹ ಮತ್ತು ಅಮ್ಮಣ. ಕಾಮದೇವನಿಗೆ ಪಾಂಡ್ಯಕುಲದ ಬಿಜ್ಜಲದೇವಿ ಪತ್ನಿಯಾದಳು. ಇವರಿಗೆ ಜಗದೇವ, ಸಿಂಗಿದೇವ ಎಂಬ ಗಂಡುಮಕ್ಕಳೂ ಆಳಿಯದೇವಿ ಎಂಬ ಮಗಳೂ ಆದರು.

ಜಗದೇವರಾಯನೇ ಪೊಂಬುರ್ಚನಾಡಿನ ಕೊನೆಯ ರಾಜ. ಇವನು ದೋರಸಮುದ್ರದ ವಿಷ್ಣುವರ್ಧನನ ಮೇಲೆ ಯುದ್ಧ ಮಾಡಿ ಸೋತುಹೋದನು. ಪೊಂಬುರ್ಚದ ನಾಡು ಹೊಯ್ಸಳ ರಾಜ್ಯದಲ್ಲಿ ವಿಲೀನವಾಯಿತು.

**ಬೀರಲದೇವಿಯ ವಂಶ :** ಇಕ್ಷ್ವಾಕು ವಂಶದಲ್ಲಿ ಧನಂಜಯ ಒಬ್ಬ ರಾಜ. ಇವನ ಹೆಂಡತಿ ಗಾಂಧಾರಿದೇವಿ. ಇವರ ಮಗ ಹರಿಶ್ಚಂದ್ರ. ಹರಿಶ್ಚಂದ್ರನ ಹೆಂಡತಿ ರೋಹಿಣೀದೇವಿ. ಇವರಿಗೆ ಇಬ್ಬರು ಗಂಡುಮಕ್ಕಳು, ದಡಿಗ ಮತ್ತು ಮಾಧವ. ದಡಿಗನ ಮಗ ಕಿರಿಯಮಾಧವ. ಇವನ ಮಗ ಹರಿವರ್ಮ. ಹರಿವರ್ಮನ ಮಗ ವಿಷ್ಣುಗೋಪ. ಇವನ ಮಗ ತಡಂಗಾಲ ಮಾಧವ. ಇವನಿಗೆ ಇಬ್ಬರು ಗಂಡುಮಕ್ಕಳು. ಅವನೀತ ಮತ್ತು ದುರ್ವಿನೀತ. ದುರ್ವಿನೀತ ಮಹಾಪ್ರತಾಪಿ. 'ವಸುಧೆಗೆ ರಾವಣ' ಎಂದು ಕುಪ್ರಸಿದ್ಧಿಯನ್ನು ಪಡೆದ ಕಾಡುವೆಟ್ಟಿ ಎಂಬ ಅರಸನನ್ನು ಇವನು ಕಾಳಗದಲ್ಲಿ ಸೋಲಿಸಿದನು. ದುರ್ವಿನೀತನಿಗೆ ಇಬ್ಬರು ಗಂಡುಮಕ್ಕಳು, ಮುಷ್ಕರ ಮತ್ತು ನೃಪಕಾಮ. ಮುಷ್ಕರನಿಗೆ ಶ್ರೀವಿಕ್ರಮ ಮತ್ತು ಭೂವಿಕ್ರಮ ಎಂಬ ಇಬ್ಬರು ಗಂಡುಮಕ್ಕಳು. ನೃಪಕಾಮನ ಮೊಮ್ಮಗ ಶ್ರೀಪುರುಷ. ಇವನಿಗೆ ಶ್ರೀವಲ್ಲಭ ಎಂಬ ಹೆಸರೂ ಇತ್ತು. ಶ್ರೀಪುರುಷನಿಗೆ ಇಬ್ಬರು ಗಂಡುಮಕ್ಕಳು, ಶಿವಮಾರ ಮತ್ತು ವಿಜಯಾದಿತ್ಯ. ಶಿವಮಾರನಿಗೆ 'ಸೈಗೊಟ್ಟಿನ್' ಎಂಬ ಬಿರುದೂ ಇತ್ತು. ವಿಜಯಾದಿತ್ಯನ ಮಗ ಎರೆಯಂಗ. ಇವನ ಮಗ ಶ್ರೀ ರಾಜಮಲ್ಲ. ಶ್ರೀ ರಾಜಮಲ್ಲನ ಮಗ ಮರುಳ. ಮರುಳನ ಮಗ ಶ್ರೀ

ಬೂತುಗ. ಇವನಿಗೆ ಎರೆಯಪ್ಪ, ಕಚ್ಚೆಯ ಗಂಗ, ಬೂತುಗ ಪೆರ್ಮಾನಡಿ ಎಂಬ ಮೂವರು ಮಕ್ಕಳು. ಬೂತುಗನ ಹೆಂಡತಿ ರೇವಕ. ಇವರಿಗೆ ಐದು ಜನ ಗಂಡುಮಕ್ಕಳು, ಮರುಳದೇವ, ಮಾರಸಿಂಹ, ಶ್ರೀ ರಾಜವಲ್ಲಭ, ಶ್ರೀ ನೀತಿಮಾರ್ಗ ಮತ್ತು ವಾಸವ ಮಹೀಭುಜ. ಶ್ರೀ ನೀತಿ ಮಾರ್ಗನಿಗೆ ಗೋವಿಂದರ ಎಂಬ ಹೆಸರೂ ಇತ್ತು. ವಾಸವ ಮಹೀಭುಜನ ಹೆಂಡತಿ ಕಂಚಲದೇವಿ. ಇವರ ಮಗ ಗೋವಿಂದರದೇವ. ಇವರ ವಂಶದಲ್ಲಿ ರಕ್ಕಸಗಂಗ ಎಂದು ಪ್ರಸಿದ್ಧನಾದ ವೀರಮಾರ್ತಾಂಡದೇವನು ರಾಜನಾದನು. ಇವನ ತಮ್ಮ ಅರುಮುಳಿದೇವ. ಇವನ ಹೆಂಡತಿ ಗಾವಬ್ಬರಸಿ. ಇವಳು ಕದಂಬ ವಂಶದವಳು. ಅರುಮುಳಿ ದೇವ ಮತ್ತು ಗಾವಬ್ಬರಸಿಯರಿಗೆ ಮೂವರು ಗಂಡು ಮಕ್ಕಳು, ಚಟ್ಟಲದೇವಿ, ಕಂಚಲದೇವಿ, ರಾಜ ವಿದ್ಯಾಧರ. (ಬಹುಶಃ ಈ ಮಕ್ಕಳನ್ನು ಬಿಟ್ಟು ತಂದೆ ತಾಯಿ ಸತ್ತುಹೋಗಿರಬೇಕು). (ಆದ್ದರಿಂದ) ರಕ್ಕಸಗಂಗ ಇವರನ್ನು ತನ್ನ ಅರಮನೆಗೆ ತಂದು ಸಾಕಿ ಬೆಳೆಸಿದನು. ಚಟ್ಟಲದೇವಿಯನ್ನು ತೊಂಡೆನಾಡು ನಾಲ್ವತ್ತೆಣ್ಟಾಸಿರಕ್ಕೆ ರಾಜನೂ ಕಂಚಿಯನಾಥನೂ ಆದ ಕಾದುವೆಟ್ಟಿ ಎಂಬುವನಿಗೆ ಕೊಟ್ಟು ಮದುವೆಯಾಗಿತ್ತು. ಎರಡನೆಯವಳಾದ ಕಂಚಲದೇವಿಯನ್ನು ಪೊಂಬುರ್ಚದ ಬೀರ ದೇವನಿಗೆ ಕೊಟ್ಟು ವಿವಾಹವಾಗಿತ್ತು. ಇವಳಿಗೆ ವೀರಲ ದೇವಿ ಎಂಬ ಹೆಸರೂ ಇತ್ತು.

ಹೊಂಬುರ್ಚದ ರಾಜ್ಯಸ್ಥಾಪಕ ರಾಳ: ರಾಳ ಎಂಬುವನು ಉತ್ತರದ ಮಥುರೆಯಲ್ಲಿ ರಾಜ್ಯಭಾರ ಮಾಡುತ್ತಿದ್ದನು. ಅವನ ತಮ್ಮ ನರಮಾಂಸ ಭಕ್ಷಕನಾಗಿ ನಗರದ ಮನುಷ್ಯರನ್ನೆಲ್ಲ ತಿನ್ನುತ್ತಿರುವುದನ್ನು ರಾಳ ನೋಡಿದನು. ಅವನಿಗೆ ಜಿಗುಪ್ಸೆ ಉಂಟಾಯಿತು. ರಾಳನು ರಾಜ್ಯತ್ಯಾಗಮಾಡಿ ಕುರುಕ್ಷೇತ್ರಕ್ಕೆ ಬಂದನು. ಅಲ್ಲಿ ಅವನನ್ನು ಎದುರಿಸಿದವರೊಡನೆ ಯುದ್ಧ ಮಾಡಿ ಗೆದ್ದನು. ಆಗ ನಾರಾಯಣನು ಮೆಚ್ಚಿ, ವಿಕಶಂಖವನ್ನೂ ಹನುಮಧ್ವಜವನ್ನೂ ಕೊಟ್ಟನು. ಅನಂತರ ಸಿಂಹರಥ ಎಂಬ ರಾಕ್ಷಸನನ್ನು ಕೊಂದನು. ಇವನ ಶೌರ್ಯಕ್ಕೆ ಮೆಚ್ಚಿದ ಜಕ್ಕಿಯಬ್ಬೆ ಸಿಂಹಲಾಂಛನವನ್ನು ಕೊಟ್ಟಳು. ಅನಂತರ ರಾಳನು ತೆಂಕದಿಕ್ಕಿಗೆ ಪ್ರಯಾಣ ಮಾಡಿದನು. ಅಂಧಾಸುರ ಎಂಬ ರಾಕ್ಷಸನನ್ನು ಕೊಂದನು. ಅಲ್ಲಿಂದ ಕನಕಪುರಕ್ಕೆ ಬಂದು ಕನಕಾಸುರನನ್ನು ಕೊಂದನು. ಅನಂತರ ಕುಂದದ ಕೋಟೆಯಲ್ಲಿದ್ದ ಕರ ಮತ್ತು ಕರದೂಷಣ ಎಂಬ ರಾಕ್ಷಸರನ್ನು ಓಡಿಸಿದನು. ಇದನ್ನು ಕಂಡ ಸೊಕ್ಕಿಯಬ್ಬೆ 'ಇದು ರಾಜಸ್ಥಾನ (ರಾಜಧಾನಿ)' ಎಂದು ಹೇಳಿ ಪೊಂಬುರ್ಚ ದಲ್ಲಿ ನೆಲೆಸಿದಳು. ಇದನ್ನು ಕಂಡ ರಾಳ "ಸಾ-ಅನ್ತಿನೋಳ್" ಎಂದು ಹರ್ಷೋದ್ಗಾರ ಮಾಡಿದನು. ಅಂದಿನಿಂದ ಈ ಅರಸರಿಗೆ 'ಸಾಂತರು' ಎಂಬ ಹೆಸರು ಬಂದಿತು.

ಪದ್ಮಾವತಿದೇವಿಯು ಉತ್ತರದ ಮಥುರೆಯಿಂದ ರಾಳನ ಜೊತೆಯಲ್ಲಿಯೇ ಬಂದು ಪೊಂಬುರ್ಚದಲ್ಲಿ ಸೊಕ್ಕಿಯ ಮರದಲ್ಲಿ ನೆಲೆಸಿದಳು. ಅಂದಿನಿಂದ ಪದ್ಮಾವತಿಗೆ ಸೊಕ್ಕಿಯಬ್ಬೆ ಎಂಬ ಹೆಸರು ಬಂದಿತು. ಇದನ್ನು 'ಸೆಂಡ' ಎನ್ನುವವನು ಚೆನ್ನಾಗಿ ತಿಳಿದಿದ್ದಾನೆ.

## ಪೊಂಬುರ್ಚನಾಡಿನ ಅರಸು ಪರಂಪರೆ

ಉಗ್ರವಂಶ

ರಾಹ

ಅನೇಕ ವರ್ಷಗಳನಂತರ ಇದೇ ವಂಶದ

ಸಹಕಾರ

ಶ್ರಿಯಾದೇವಿ (ಪತ್ನಿ)

ಜಿನದತ್ತ (ದಕ್ಷಿಣಕ್ಕೆ ಬಂದು ಪೊಂಬುರ್ಚದ ರಾಜನಾದ)

ಅನೇಕ ವರ್ಷಗಳ ನಂತರ ಇದೇ ವಂಶದ

ಶ್ರೀಕೇಶಿ — ಜಯಕೇಶಿ

ಶ್ರೀಕೇಶಿ
ಮಹಾದೇವಿ (ಪತ್ನಿ)

ರಣಕೇಶಿ

ಇವರ ನಂತರ ಕೆಲವರು ರಾಜ್ಯವಾಳಿದನು. ಅನಂತರ ಇದೇ ವಂಶದ

ಹಿರಣ್ಯಗರ್ಭ
ಲಕ್ಷ್ಮೀದೇವಿ (ಪತ್ನಿ) (ಬನವಾಸಿಯ ಅರಸು ಕಾಮದೇವನ ಮಗಳು)

ಚಾಗಿಶಾಂತರ
ಎಂಜಲದೇವಿ (ಪತ್ನಿ) (ಆಳುಪರ ಅರಸ ರಣಂಜಯನ ಮಗಳು)

ವೀರಶಾಂತರ
ಚಾಕಲದೇವಿ (ಪತ್ನಿ) (ಅಣೆಯೂರ ಶಾಂತಿವರ್ಮನ ಮಗಳು)

ಕನ್ನರಶಾಂತರ — ಕಾಮದೇವ

ಕಾಮದೇವ — ಚಂದಲದೇವಿ (ಪತ್ನಿ) (ಬೀರಬಯಲ್‌ನಾಥನ ಮಗಳು)

ತ್ಯಾಗಿಶಾಂತರ — ನಾಗಲದೇವಿ (ಪತ್ನಿ) (ಕದಂಬರ ಹರಿವರ್ಮನ ಮಗಳು)

ನನ್ನಿಶಾಂತರ — ಸಿರಿಯಾದೇವಿ (ಪತ್ನಿ) (ಪಲಸಿಗೆನಾಡಿನ ಅರಸ **ಅರಿಕೇಸರಿಯ ಮಗಳು**)

ರಾಯಶಾಂತರ — ಅಕ್ಕಾದೇವಿ (ಪತ್ನಿ)

ಚಿಕ್ಕವೀರಶಾಂತರ — ಬಿಜ್ಜಲದೇವಿ (ಪತ್ನಿ)

ಅಣ್ಣಮದೇವ — ಹೋಚಲದೇವಿ (ಪತ್ನಿ)

ಬೀರಬ್ಬರಸಿ (ಇವಳು ಆಳುಪರ ಬಂಕಿಯಾಳ್ವನ ಪತ್ನಿಯಾದಳು) — ತೈಲಪದೇವ




ಜಗದೇವನಿಗೆ ಜಗದೇಕದೇವರಾಯ ಎಂಬ ಹೆಸರೂ ಇದ್ದಂತೆ ತೋರುತ್ತದೆ. ಇವನೇ ಪೊಂಬುರ್ಚ ನಾಡಿನ ಆರಸೊತ್ತಿಗೆಯ ಕೊನೆಯ ರಾಜ. ಇವನು ದ್ವಾರಸಮುದ್ರದ ವಿಷ್ಣುವರ್ಧನನ ಮೇಲೆ ಯುದ್ಧ ಮಾಡಿ ಸೋತು ಹೋದ. ಈ ರಾಜ್ಯ ಹೊಯ್ಸಳ ರಾಜ್ಯದಲ್ಲಿ ವಿಲೀನವಾಗುತ್ತದೆ.


ಬೀರಲದೇವಿಯ ವಂಶ
ಇಕ್ಷ್ವಾಕು ವಂಶ
ಧನಂಜಯ
ಗಾಂಧಾರಿದೇವಿ (ಪತ್ನಿ)
ಹರಿಶ್ಚಂದ್ರ
ರೋಹಿಣೀದೇವಿ (ಪತ್ನಿ)
ದಡಿಗ
ಮಾಧವ
ಕಿರಿಯ ಮಾಧವ
ಹರಿವರ್ಮ
ವಿಷ್ಣುಗೋಪ
ತದಂಗಾಲ ಮಾಧವ
ಅವಿನೀತ
ದುರ್ವಿನೀತ
ಮುಷ್ಕರ
ನೃಪಕಾಮ
ಶ್ರೀಪುರುಷ (ನೃಪಕಾಮನ ಮೊಮ್ಮಗ)
ಶ್ರೀವಿಕ್ರಮ
ಭೂವಿಕ್ರಮ
ಶಿವಮಾರ
[ಇವನಿಗೆ ಸೈಗೊಟ್ಟನ್ ಎಂಬ ಬಿರುದು ಇತ್ತು]
ವಿಜಯಾದಿತ್ಯ
ಎರೆಯಂಗ
ಶ್ರೀರಾಜಮಲ್ಲ
ಮರುಳ
ಶ್ರೀಬೂತುಗ
ಎರೆಯಪ್ಪ
ಕಚ್ಚೆಯಗಂಗ
ಬೂತುಗ
ಪೆರ್ಮಾನಡಿ
+ ರೇವಕ (ಪತ್ನಿ)
೧ ಮರುಳದೇವ
೨ ಮಾರಸಿಂಹ
೩ ಶ್ರೀರಾಜವಲ್ಲಭ
೪ ಶ್ರೀನೀತಿಮಾರ್ಗ
೫ ವಾಸವಮಹೀಭುಜ




## ಆಧಾರ

೧. ಎಪಿಗ್ರಾಫಿಯ ಕರ್ನಾಟಿಕಾ

**Inscriptions of Shimoga District—Part II**

ಶಾಸನ ಸಂಖ್ಯೆ : 1) ನಗರ ತಾಲ್ಲೂಕು - Nr. 35, 36, 40, 47, 59

2) ತೀರ್ಥಹಳ್ಳಿ ತಾಲ್ಲೂಕು-Tį. 192

3) ಸಾಗರ ತಾಲ್ಲೂಕು–Sa. 80

4) ಇದೇ ಗ್ರಂಥದ ಪೀಠಿಕೆ

೨. ಕರ್ನಾಟಕ ಪರಂಪರೆ, ಭಾಗ ೧ ಮತ್ತು ೨

೩. ಕರ್ನಾಟಕ ರಾಜ್ಯ ಗೆಜೆಟಿಯರ್-ಶಿವಮೊಗ್ಗ ಜಿಲ್ಲೆ